# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2431 |
| ಉತ್ತರಿಸಬೇಕಾದ ದಿನಾಂಕ | : | 30.03.2021 |
| ಉತ್ತರಿಸಬೇಕಾದ ಸಚಿವರು | : | ಸಹಕಾರ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮದ್ದೂರು ತಾಲ್ಲೂಕು, ಕೊಪ್ಪ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಚುನಾಯಿತ ಸದಸ್ಯರ ಅವಧಿ ಯಾವಾಗ ಮುಕ್ತಾಯವಾಗಿದೆ: ಮುಕ್ತಾಯಗೊಂಡಿದ್ದರೂ ಈವರೆಗೆ ಚುನಾವಣೆ ನಡೆಸದಿರಲು ಕಾರಣಗಳೇನು: | ಮದ್ದೂರು ತಾಲ್ಲೂಕು ಕೊಪ್ಪ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕೊಪ್ಪ ಇದರ ಆಡಳಿತ ಮಂಡಳಿಯ ಅವಧಿಯು ದಿನಾಂಕ:26.03.2021ಕ್ಕೆ ಮುಕ್ತಾಯಗೊಂಡಿರುತ್ತದೆ.<br><br>ಸದರಿ ಸಂಘದ ಚುನಾವಣೆಯ ಸಂಬಂಧ ಕರಡು ಮತದಾರರ ಪಟ್ಟಿಯನ್ನು ತಯಾರಿಸಿ ಪ್ರಕಟಿಸಲಾಗಿದ್ದು, ನಂತರ 2014-15ನೇ ಸಾಲಿನ ಹಿಂದಿನ ಸಾಲುಗಳ ಷೇರು ಮತ್ತು ಪಿಗ್ಮಿ ಸಾಲಗಳಲ್ಲಿ ಗೊಂದಲ ಉಂಟಾಗಿದ್ದ ಕಾರಣ ಪ್ರಕರಣ 64ರ ವಿಚಾರಣೆ ನಡೆಸಿದ್ದು, ಸದರಿ ಪ್ರಕರಣದಲ್ಲಿನ ಅಂಶಗಳನ್ನು ಪರಿಗಣಿಸಿ ಅಂತಿಮ ಮತದಾರರ ಪಟ್ಟಿಯನ್ನು ತಯಾರಿಸಲು ವಿಳಂಬವಾಗಿರುತ್ತದೆ.<br><br>ಸದರಿ ಆಡಳಿತ ಮಂಡಲಿಯ ಅವಧಿಯು ಮುಕ್ತಾಯಗೊಂಡ ನಂತರ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(5) ರಡಿ ಆಡಳಿತಾಧಿಕಾರಿಯಾಗಿ ಸಹಕಾರ ಅಭಿವೃದ್ಧಿ ಅಧಿಕಾರಿ, ಮದ್ದೂರು ಇವರನ್ನು ನೇಮಕ ಮಾಡಲಾಗಿದೆ. |
| ಆ) | ಚುನಾವಣೆ ನಡೆಸಲು ಅಗತ್ಯ ಮತದಾರರ ಪಟ್ಟಿಯನ್ನು ಪರಿಷ್ಕರಣೆ ಮಾಡಲಾಗಿದೆಯೇ: (ಪರಿಷ್ಕರಣೆ ಮಾಡಿದ್ದಲ್ಲಿ ವಿವರ ನೀಡುವುದು) | ಸಂಘದ ಅಂತಿಮ ಮತದಾರರ ಪಟ್ಟಿಯನ್ನು ಪ್ರಕಟಿಸಲು ಬಾಕಿ ಇದ್ದು, ಮೇ-2021ರಲ್ಲಿ ಚುನಾವಣೆ ಜರುಗಿಸಲು ಉದ್ದೇಶಿಸಲಾಗಿತ್ತು. ಕೋವಿಡ್-19 ಸಾಂಕ್ರಾಮಿಕ ರೋಗದ ಹಿನ್ನಲೆಯಲ್ಲಿ ಸರ್ಕಾರದ ನಿರ್ದೇಶನದಂತೆ ಸಹಕಾರ ಚುನಾವಣಾ ಪ್ರಾಧಿಕಾರ, ಬೆಂಗಳೂರು ರವರು ದಿನಾಂಕ:21.06.2021ರ ಸುತ್ತೋಲೆ ರೀತ್ಯಾ ದಿನಾಂಕ:26.04.2021 ರಿಂದ 06 ತಿಂಗಳ ಅವಧಿಯವರೆಗೆ ಹಾಗೂ ದಿನಾಂಕ:19.07.2021ರ ಸುತ್ತೋಲೆಯಂತೆ ಸಹಕಾರ ಸಂಘ ಮತ್ತು ಬ್ಯಾಂಕುಗಳ ಸಾಮಾನ್ಯ ಚುನಾವಣೆಗಳನ್ನು ಡಿಸೆಂಬರ್ 2021ರ ಅಂತ್ಯದವರೆಗೂ ಮುಂದೂಡಿ ಆದೇಶಿಸಿರುವ ಹಿನ್ನಲೆಯಲ್ಲಿ ಸಂಘದ ಚುನಾವಣಾ ಪ್ರಕ್ರಿಯೆಯು ಸಧ್ಯಕ್ಕೆ ಸ್ಥಗಿತಗೊಂಡಿರುತ್ತದೆ. |
| ಇ) | ಸಂಘದ ಚುನಾಯಿತ ಸದಸ್ಯರ ಅವಧಿ ಮುಕ್ತಾಯಗೊಂಡಿರುವ ಹಿನ್ನಲೆಯಲ್ಲಿ ಹೊಸ ಸಾಲ ಮಂಜೂರಾತಿ ಮಾಡಲು ಸಾಧ್ಯವಾಗದೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಎಷ್ಟು ಸಮಯದೊಳಗಾಗಿ ಚುನಾವಣೆ ನಡೆಸಲಾಗುವುದು? | ಆಡಳಿತ ಮಂಡಳಿಯ ಅವಧಿಯು ಮುಕ್ತಾಯಗೊಂಡ ನಂತರ ಆಡಳಿತಾಧಿಕಾರಿಯನ್ನು ನೇಮಕಮಾಡಿದ್ದು, ಸಂಘದ ದೈನಂದಿನ ವ್ಯವಹಾರಗಳು ಸುಸೂತ್ರವಾಗಿ ನಡೆಯಲು ಕ್ರಮವಿಡಲಾಗಿದೆ. ಹೊಸ ಸಾಲ ಮಂಜೂರಾತಿಗೆ ಯಾವುದೇ ತೊಂದರೆ ಉಂಟಾಗಿರುವುದಿಲ್ಲ.<br><br>ಕೋವಿಡ್-19 ಸಾಂಕ್ರಾಮಿಕ ರೋಗದ ಹಿನ್ನಲೆಯಲ್ಲಿ ಸಹಕಾರ ಸಂಘ/ಬ್ಯಾಂಕುಗಳ ಸಾಮಾನ್ಯ ಚುನಾವಣೆಗಳನ್ನು ಸರ್ಕಾರವು ಮುಂದೂಡಿರುವ ಕಾರಣ ಇದು ತೆರವುಗೊಂಡ ಕೂಡಲೇ ಚುನಾವಣೆ ನಡೆಸಲು ಕ್ರಮವಿಡಲಾಗುವುದು. |

**ಸಿಒ 17 ಸಿಎಲ್‌ಎಮ್ 2021 (ಇ)**

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು